KA / BG-GPO/2515/WPP-47/2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಫೆಬ್ರವರಿ ೫, ೨೦೦೯ (ಮಾಘ ೧೬, ಶಕ ವರ್ಷ ೧೯೩೦) | ಸಂಚಿಕೆ ೬ |
|---|---|---|

## ಭಾಗ – ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

**ENERGY SECRETARIAT**

**NOTIFICATION**

**No. EN 137 PSR 2006, Bangalore, Dated: 7th January 2009**

1. Whereas the draft of the Karnataka Electricity Regulatory Commission (Chairman and other Member, Remuneration, Allowance and conditions of Service) (Amendment), Rules, 2008 in Notification No. EN 137 PSR 2006 dated 19.9.2008 was published as required under Sub-section (1) of Section 57 of the Karnataka Electricity reform Act, 1999 (Karnataka Act 25 of 1999) in Part IV-A of the Karnataka Gazette Extraordinary No.1089 dated 1.10.2008 inviting objections and suggestions from all persons likely to be affected thereby within thirty days from the date of publication of the draft in the Official Gazette.

2. Whereas the said Gazette was made available to the public on the 1st October 2008

3. And whereas no objections and suggestions have been received within the period specified above by the State Government.

4. Now, therefore, in exercise of powers conferred by Section 57 of the Karnataka Electricity Reform Act, 1999 (Karnataka Act 25 of 1999), the Government of Karnataka hereby makes the following rules, namely:

## RULES

**1. Title and commencement.-** (1) These rules may be called the Karnataka Electricity Regulatory Commission (Chairman and other Members, remuneration, allowance and conditions of service) (Amendment) Rules, 2008.

(2) They shall come into force from the date of their publication in the Official Gazette.

**2. Amendment of rule 1.-** In the Karnataka Electricity Regulatory Commission (Chairman and other Members, remuneration, allowance and conditions of service) (Amendment) Rules, 2007 in rule 1, for sub-rule (2) the following shall be and shall always be deemed to have been substituted, namely:-

"(2) They shall be deemed to have come into force with effect from the first day of April, 2004."

By order and in the name of the Governor of Karnataka,

**S.J.SAMPATHKUMAR**

PR. 58

Under Secretary to Government,

Energy Department.

## ಕಾರ್ಮಿಕ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಕಾಇ 16 ಕಾಬಾಸೇ 2008, ಬೆಂಗಳೂರು, ದಿನಾಂಕ: 7ನೇ ಜನವರಿ 2009**

ಶ್ರೀ ಗಜಾನನ ವಿ. ಚಂಡಿಯೇಕರ್, ಪತ್ರಾಂಕಿತ ವ್ಯವಸ್ಥಾಪಕರು, ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ ಇವರನ್ನು ಸಮಾಜ ಕಲ್ಯಾಣ ಇಲಾಖೆಯ ಅಧಿಸೂಚನೆ ಸಂಖ್ಯೆ: ಸಕಇ 287 ಬಿಇಟಿ 2008, ದಿ:22.11.2008ರ ಮೂಲಕ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ, ಕಾರವಾರ ಈ ಹುದ್ದೆಗೆ ನೇಮಿಸಿರುವುದರಿಂದ, ಸದರಿಯವರ ಸೇವೆಯನ್ನು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 16(ಎ)(ii) ರ ಪ್ರಕಾರ 2 ವರ್ಷಗಳ ಅವಧಿಗೆ ಮೇಲೆ ಹೇಳಿದ ಹುದ್ದೆಗೆ ನಿಯೋಜನೆಯ ಮೇಲೆ ನೇಮಿಸಲು ಸದರಿಯವರ ಸೇವೆಯನ್ನು ಸಮಾಜ ಕಲ್ಯಾಣ ಇಲಾಖೆಯ ವಶಕ್ಕೆ ಬಿಟ್ಟುಕೊಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಶಿವರಾಮ ಗೌಡ**

ಪಿ.ಆರ್. 59

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು)

## HOME SECRETARIAT

## NOTIFICATION

**No. HD 07 PCE 2008(P), Bangalore, Dated: 13th January 2009**

Whereas in exercise of the powers conferred by sub-section (1) of the section 3 of the Commissions of Inquiry Act, 1952 (Central Act of 1952) the Government of Karnataka appointed a Commission of Inquiry consisting of Hon'ble Justice Kedambady Jagannathashetty, Retired Judge of High Court of Karnataka for a period of four months vide Notification No:HD 370 SST 2008, dated 17.06.2008 for the purpose of making an inquiry into the incident of police firing on 10th June 2008 resulting in the death of two persons in Haveri city Haveri. Then after it was extended for three months from 17.10.2008.

2. Whereas, the Commission has requested for extension of the term of the Commission to complete the work.

3. Now, therefore in exercise of the powers the Government are pleased to extend the term of the above said Commission for a period of three months from 16.01.2009 to complete the inquiry and submit its report.

By order and in the name of the Governor of Karnataka,

**K.C. SIDDAPPA**

PR. 60

Under Secretary to Government,

Home Department, (Law and Order).

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಲೋಇ 738 ಆಕೋ–3/08, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2008**

"ರಾಷ್ಟ್ರೀಯ ಕೃಷಿ ವಿಕಾಸ" ಯೋಜನೆಯ ನೆರವಿನಡಿಯಲ್ಲಿ ಕೈಗೊಳ್ಳುವ ಸಮಗ್ರ ಮೀನುಗಾರಿಕೆ ಅಭಿವೃದ್ಧಿ ಕಾರ್ಯಕ್ರಮಗಳ ಪೈಕಿ ರಾಜ್ಯದಲ್ಲಿನ ಮೀನು ಮರಿ ಉತ್ಪಾದನಾ/ಪಾಲನಾ ಕೇಂದ್ರಗಳನ್ನು ಮೇಲ್ದರ್ಜೆಗೇರಿಸುವ ಸಲುವಾಗಿ ಮೀನುಮರಿ ಕೇಂದ್ರಗಳ ದುರಸ್ಥಿ ಹಾಗೂ ನವೀಕರಣ ಕಾಮಗಾರಿಗಳನ್ನು (ಸಿವಿಲ್ ಕಾಮಗಾರಿ) ಸರ್ಕಾರಿ ಸ್ವಾಮ್ಯದ ಈ ಕೆಳಕಂಡ 4 ಸಂಸ್ಥೆಗಳಿಗೆ ನೇರವಾಗಿ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

1) ಕೃಷ್ಣಾ ಭಾಗ್ಯ ಜಲ ನಿಗಮ ನಿಯಮಿತ, ಬೆಂಗಳೂರು.
2) ಕರ್ನಾಟಕ ನೀರಾವರಿ ನಿಗಮ ನಿಯಮಿತ, ಬೆಂಗಳೂರು.
3) ಕರ್ನಾಟಕ ಗ್ರಾಮಾಂತರ ಬಿಲ್ಡಿಂಗ್ ಸೆಂಟರ್, ಬೆಂಗಳೂರು.
4) ನಿರ್ಮಿತಿ ಕೇಂದ್ರ, ಮೈಸೂರು/ತುಮಕೂರು/ಕೊಪ್ಪಳ/ಬೆಂಗಳೂರು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಚಂದ್ರಕುಮಾರ್**

ಪಿ.ಆರ್. 61 ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ವಾಕೈ 24 ರೇಉನಿ 2008, ಬೆಂಗಳೂರು, ದಿನಾಂಕ: 7ನೇ ಜನವರಿ 2009**

ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ಆರ್ಟಿಕಲ್ ಆಫ್ ಅಸೋಸಿಯೇಷನ್‌ನ ಆರ್ಟಿಕಲ್ 8(ಎ) ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಶ್ರೀ ಬಿ.ಎಸ್. ರಾಮಪ್ರಸಾದ್, ಭಾಅಸೇ., ಸರ್ಕಾರದ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ ಹಾಗೂ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರನ್ನು ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ಅಧ್ಯಕ್ಷರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಪಿ.ಆರ್. 62 ಪೀಠಾಧಿಕಾರಿ (ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಸಹಕಾರ ಸಚಿವಾಲಯ

**ಅಧಿಸೂಚನೆ ಸಂಖ್ಯೆ: ಸಿಒ 06 ಸಿಎನ್‌ಎಸ್ 2009, ಬೆಂಗಳೂರು, ದಿನಾಂಕ: 6ನೇ ಜನವರಿ 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು **ಶ್ರೀ ಪುಟ್ಟಸ್ವಾಮಿ ಬಿನ್ ಲೇ: ಮಂಚೇಗೌಡ, ಮಾದೇಗೌಡನಕೊಪ್ಪಲು, ದುದ್ದ ಹೋಬಳಿ, ಮಂಡ್ಯ ತಾಲ್ಲೂಕು** ಇವರನ್ನು **ಮಂಡ್ಯ ಜಿಲ್ಲೆ ಮತ್ತು ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್** ನಿ. **ಮಂಡ್ಯ** ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 63 ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಸಇ 301 ಎಂಆರ್‌ಇ 2008, ಬೆಂಗಳೂರು, ದಿನಾಂಕ: 6ನೇ ಜನವರಿ 2009**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966 ರ ಕಲಂ 11(1)(ix)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕೊಳ್ಳೇಗಾಲ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸದಸ್ಯರನ್ನಾಗಿ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

1. ಶ್ರೀ ಹೆಚ್.ಎಂ. ಮಹಾದೇವಪ್ಪ ಬಿನ್ ಆರ್. ಮಾದನಾಯಕ ಹೊಸ ಹಂಪಾಪುರ, ಕೊಳ್ಳೇಗಾಲ ತಾ:
2. ಶ್ರೀ ರಂಗಶೆಟ್ಟಿ ಬಿನ್ ರಾಮಯ್ಯ ಶೆಟ್ಟಿ ಕುರಟ್ಟಿ ಹೊಸೂರು, ಕೊಳ್ಳೇಗಾಲ ತಾ:
3. ಶ್ರೀಮತಿ ಡಿ.ಪಿ. ಮೀನಾಕ್ಷಿ ಕೋಂ ವಿ. ವೀರಪ್ಪ ಮಹಾದೇಶ್ವರ ಬೆಟ್ಟ, ಕೊಳ್ಳೇಗಾಲ ತಾ:

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಕೆ. ವಾಸುದೇವ ಮೂರ್ತಿ**

ಪಿ.ಆರ್. 64 ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಸಿಒ 172 ಸಿಎಸ್‌ಎಸ್ 2008, ಬೆಂಗಳೂರು, ದಿನಾಂಕ: 7ನೇ ಜನವರಿ 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು **ಗದಗ ಜಿಲ್ಲೆ ರೋಣ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ರೋಣ** ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

1. ಶ್ರೀ ವೆಂಕನಗೌಡ ಹುಚ್ಚನಗೌಡ ಗೋವಿಂದೇಗೌಡ ಸಾ: ಮಾಡಲಗೇರಿ, ರೋಣ ತಾಲ್ಲೂಕು.
2. ಶ್ರೀ ರಾಮಣ್ಣ ಬಸಪ್ಪ ಹೊಂಬಳ ಸಾ: ರೋಣ, ರೋಣ ತಾ:
3. ಶ್ರೀಮತಿ ಶಾಂತಮ್ಮ ಗಾಣಗೇರಿ ಸಾ: ಮುಗಳಿ, ರೋಣ ತಾ:

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 65 ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಸಿಒ 176 ಸಿಎಸ್‌ಎಸ್ 2008, ಬೆಂಗಳೂರು, ದಿನಾಂಕ: 13ನೇ ಜನವರಿ 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು **ದಾವಣಗೆರೆ ಜಿಲ್ಲೆ ಜಗಳೂರು ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಜಗಳೂರು** ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

1. ಶ್ರೀ ಎ.ಕೆ. ನಿಂಗಪ್ಪ ಬಿನ್ ಸವರಪ್ಪ, ಜೆ.ಸಿ.ಆರ್. ಬಡಾವಣೆ, ಎ.ಕೆ. ಕಾಲೋನಿ ಕ್ಯಾಂಪ್, ಜಗಳೂರು.
2. ಶ್ರೀ ಅಜಯ್ (ಭಂಡಾರಿ), ಅಕ್ಷಿತ ಸಿಮೆಂಟ್ ಸ್ಟೀನ್ ಅಂಗಡಿ, ಚಳ್ಳಕೆರೆ–ದಾವಣಗೆರೆ ರಸ್ತೆ, ಜಗಳೂರು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 66 ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 9 ಎಲ್‌ಆರ್‌ಎ 2009, ಬೆಂಗಳೂರು, ದಿನಾಂಕ: 13ನೇ ಜನವರಿ 2009**

ಕರ್ನಾಟಕ ಭೂ ಸುಧಾರಣೆ ಕಾಯ್ದೆ, 1961ರ (1962ರ 10ನೇ ಸಂಖ್ಯೆಯ ಕರ್ನಾಟಕ ಕಾಯ್ದೆ ತಿದ್ದುಪಡಿಯಾದಂತೆ ಕಲಂ 48ರ ಉಪ ಕಲಂ (1) ರಿಂದ (3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಭೂ ನ್ಯಾಯ ಮಂಡಳಿಗೆ ಈ ಹಿಂದೆ ಮಾಡಿದ್ದ ಎಲ್ಲಾ ಅಧಿಕಾರೇತರ ಸದಸ್ಯರ ನಾಮ ನಿರ್ದೇಶನಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ, ಅವರ ಬದಲಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮ ನಿರ್ದೇಶನ ಮಾಡಿ ಸದರಿ ಭೂ ನ್ಯಾಯ ಮಂಡಳಿಗಳನ್ನು ಪುನರ್ ರಚಿಸಿ ಆದೇಶ ಹೊರಡಿಸಿದೆ.

| ಕ್ರ. ಸಂ. | ಭೂ ನ್ಯಾಯ ಮಂಡಳಿಯ ಹೆಸರು | ಅಧಿಕಾರೇತರ ಸದಸ್ಯರ ಹೆಸರು ಮತ್ತು ವಿಳಾಸ |
|---|---|---|
| 1. | ಆನೇಕಲ್ ತಾಲ್ಲೂಕು | 1. ಶ್ರೀ ಹೆಚ್.ವೈ. ಲೋಕೇಶ್ ಬಿನ್ ಯರ್ರಪ್ಪ, ಹಾರಗದ್ದೆ, ಜಿಗಣಿ ಹೋಬಳಿ, ಆನೇಕಲ್ ತಾಲ್ಲೂಕು (ಸಾಮಾನ್ಯ)<br>2. ಶ್ರೀ ಪಿ. ರಾಜು ಬಿನ್ ಪಿಳ್ಳಪ್ಪ, (ಸಾಮಾನ್ಯ) ದಿನ್ನೂರು ಕಸಬಾ ಹೋಬಳಿ, ಆನೇಕಲ್ ತಾಲ್ಲೂಕು.<br>3. ಶ್ರೀ ಎಸ್. ಶ್ರೀಧರ್ ಬಿನ್ ಸುಬ್ಬಾರೆಡ್ಡಿ, (ಸಾಮಾನ್ಯ) ಸರ್ಜಾಪುರ, ಆನೇಕಲ್ ತಾಲ್ಲೂಕು.<br>4. ಶ್ರೀ ಪಿ. ನಾರಾಯಣಸ್ವಾಮಿ ಬಿನ್ ಪಾಪಣ್ಣ, (ಎಸ್.ಸಿ) ಅತ್ತಿಬೆಲೆ, ಆನೇಕಲ್ ತಾಲ್ಲೂಕು. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣಗೌಡ**

ಪಿ.ಆರ್. 67

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ)

**HOME SECRETARIAT**

**NOTIFICATION**

**No. HD 100 SFB 2007, Bangalore, Dated: October 2008**

In exercise of the powers conferred by clause (d) of sub-section (2) of section 39 of the Karnataka Fire Force Act, 1984 (Karnataka Act 42 of 1964), the Government of Karnataka hereby makes the following rules, namely:

**RULES**

**1. Title and Commencement:** (1) These rules may be called the Karnataka Fire force (Maintenance of Disciplines and Removal from Service) (Amendment) Rules, 2008.

2. They shall come in to force on the date of their publication in the official Gazettee.

**3. Amendment of rule 4:** In the Karnataka Fire Force (Maintenance of Disciplines and Removal from Services) Rules, 1971 (hereinafter referred to as the said rules), in rule 4, in sub rule (2) after the word and the figure "column 4" the word and the figure "and 6" shall be inserted.

**4. Amendment of rule 5 :**In the sub rule (1) of Rule of the said rules in clause (B) item (iv) shall be omitted.

**5. Amendment of Schedule:** For the Schedule to the said rules, the following shall be substituted namely:

**SCHEDULE**

| Sl. No | Class of posts | Authority empowered to appointment | Authority empowered to impose penalties and penalties which it may impose | | Appellate Authority |
|---|---|---|---|---|---|
| | | | Authority | Penalties specified in the rules | |
| 1 | Director | Government | Government | A(i to iv)<br>B (i to iii) | Governor |
| 2 | Deputy Director | Government | Government<br><br>DGP & DGFES | A(i to iv)<br>B (i to iii)<br>(B) (i) | Governor<br><br>Government |
| 3 | Chief Fire Officer | Government | Government<br>DGP & DGFES | A(i to iv)<br>B (i to iii)<br>(B) (I & iii) | Governor<br><br>Government |
| 4 | Regional Fire Officer | Government | Government<br>DGP & DGFES | A(i to iv)<br>B (i to iii)<br>(B) (i to iii) | Governor<br><br>Government |
| 5 | District Fire Officer | Director General of Police and Director General Fire & Emergency Services (IPS Above Super Time Scale) | IGP & Addl DG DIGP | A(i to iv)<br>B (i to iii) | DGP & DGFES<br>IGP & Addl DG |
| 6 | Fire Station Officer | Director General of Police and Director General Fire & Emergency Services (IPS Above Super Time Scale) | IGP & Addl DG DIGP | A(i to iv)<br>B (i to iii) | DGP & DGFES<br>IGP & Addl DG |
| 7 | Asst Fire Station Officer | Director General of Police and Director General Fire & Emergency Services (IPS Above Super Time Scale) | DIGP Deputy Director (A) Chief Fire Officer | A(i to iv)<br>B (i to iii)<br>C(iii) | IGP & Addl DG<br>DIGP<br>Deputy Director (A) |
| 8 | Driver Mechanic | Deputy Inspector General of Police, Fire & Emergency Services (IPS Above Super Time Scale) | DIGP<br>Deputy Director (A)<br>Chief Fire Officer | A(i to iv)<br>B (i to iii)<br><br>C(i to iii) | IGP & Addl DG<br>DIGP<br><br>Deputy Director (A) |
| 9 | Leading Fireman | Deputy Inspector General of Police, Fire & Emergency Services (IPS Above Super Time Scale) | DIGP<br>Deputy Director (A)<br>Chief Fire Officer | A(i to iv)<br>B (i to iii)<br><br>C(i to iii) | IGP & Addl DG<br>DIGP<br><br>Deputy Director (A) |
| 10 | Fireman Driver | Deputy Inspector General of Police, Fire & Emergency Services (IPS Above Super Time Scale) | DIGP<br>Deputy Director (A)<br>Chief Fire Officer | A(i to iv)<br>B (i to iii)<br><br>C(i to iii) | IGP & Addl DG<br>DIGP<br><br>Deputy Director (A) |

| | | | | | |
|---|---|---|---|---|---|
| 11 | Fireman | Deputy Inspector General of Police, Fire & Emergency Services (IPS Above Super Time Scale) | DIGP<br>Deputy Director (A)<br>Chief Fire Officer | A(i to iv)<br>B (i to iii)<br>C(i to iii) | IGP & Addl DG<br>DIGP<br>Deputy Director (A) |
| 12 | Fitter Class I, II & III | Deputy Inspector General of Police, Fire & Emergency Services (IPS Above Super Time Scale) | DIGP<br>Deputy Director (A)<br>Chief Fire Officer | A(i to iv)<br>B (i to iii)<br>C(i to iii) | IGP & Addl DG<br>DIGP<br>Deputy Director (A) |
| 13 | Electrician | Deputy Inspector General of Police, Fire & Emergency Services (IPS Above Super Time Scale) | DIGP<br>Deputy Director (A)<br>Chief Fire Officer | A(i to iv)<br>B (i to iii)<br>C(i to iii) | IGP & Addl DG<br>DIGP<br>Deputy Director (A) |
| 14 | Carpenter Class III | Deputy Inspector General of Police, Fire & Emergency Services (IPS Above Super Time Scale) | DIGP<br>Deputy Director (A)<br>Chief Fire Officer | A(i to iv)<br>B (i to iii)<br>C(i to iii) | IGP & Addl DG<br>DIGP<br>Deputy Director (A) |
| 15 | Welder cum Tin smith Class II | Deputy Inspector General of Police, Fire & Emergency Services (IPS Above Super Time Scale) | DIGP<br>Deputy Director (A)<br>Chief Fire Officer | A(i to iv)<br>B (i to iii)<br>C(i to iii) | IGP & Addl DG<br>DIGP<br>Deputy Director (A) |
| 16 | Painter Class II | Deputy Inspector General of Police, Fire & Emergency Services (IPS Above Super Time Scale) | DIGP<br>Deputy Director (A)<br>Chief Fire Officer | A(i to iv)<br>B (i to iii)<br>C(i to iii) | IGP & Addl DG<br>DIGP<br>Deputy Director (A) |
| 17 | Cleaner | Deputy Inspector General of Police, Fire & Emergency Services (IPS Above Super Time Scale) | DIGP<br>Deputy Director (A)<br>Chief Fire Officer | A(i to iv)<br>B (i to iii)<br>C(i to iii) | IGP & Addl DG<br>DIGP<br>Deputy Director (A) |

By order and in the name of the Governor of Karnataka,

**INAYATH ULLA KHAN**

PR.68

Under Secretary to Government,

Home Department, (Police Auxillary Services)

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಆಇ 757 ವೆಚ್ಚ 12/08, ಬೆಂಗಳೂರು, ದಿನಾಂಕ: 15ನೇ ಜನವರಿ 2009**

ಶಿವಮೊಗ್ಗ ನಗರದ ಎಸ್.ಎನ್. ಮಾರ್ಕೆಟ್ ಜಾಗದಲ್ಲಿ ಅಂತರಾಷ್ಟ್ರೀಯ ಮಟ್ಟದ ವಾಣಿಜ್ಯ ಸಂಕೀರ್ಣವನ್ನು ನಿರ್ಮಿಸಲು ಸದರಿ ಕಾಮಗಾರಿಯ ಯೋಜನಾ ಸಲಹೆಗಾರರನ್ನಾಗಿ (Project consultant) ಹಾಗೂ entire hand-holding process ಸಂಬಂಧವಾಗಿ ರಾಜ್ಯ ಸರ್ಕಾರದ ಸ್ವಾಯತ್ತ ಸಂಸ್ಥೆ ಹಾಗೂ ಉತ್ತಮ ಅನುಭವವುಳ್ಳ ಸಂಸ್ಥೆಯಾದ ಮೆ:ಐಡೆಕ್ ಸಂಸ್ಥೆಯನ್ನು (Infrastructure Development Corporation in Karnataka- IDECK) 5.00 ಲಕ್ಷ ರೂ.ಗಳ ಸೇವಾ

ವೆಚ್ಚದಲ್ಲಿ ಶಿವಮೊಗ್ಗ ಸಿ.ಎಂ.ಸಿ ವತಿಯಿಂದ ನೇರವಾಗಿ ನೇಮಕ ಮಾಡಿಕೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಸರ್ಕಾರವು ನಗರಾಭಿವೃದ್ಧಿ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

ಪಿ.ಆರ್. 69

## ಸಹಕಾರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಇ 248 ಎಂಆರ್‌ಇ 2008, ಬೆಂಗಳೂರು, ದಿನಾಂಕ: 12ನೇ ಜನವರಿ 2009**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 11(1)(ix)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ನಿಪ್ಪಾಣಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಸದಸ್ಯರನ್ನಾಗಿ ಈ ಕೆಳಕಂಡ ಮೂವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

1 ಶ್ರೀ ಅಣ್ಣಾಸಾಹೇಬ್ ಯಶವಂತ್ ಯಾದವ್ ಮಂಜರಿ
2 ಶ್ರೀಮತಿ ಸುಜಾತ ರಾಜಕುಮಾರ್ ಖೋತ್ ಶಾಮನೆವಾಡಿ
3 ಶ್ರೀ ಸುರೇಶ್ ಸತ್ಯಪ್ಪ ತಳವಾರ್ ಜೈನಾಪುರ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಕೆ. ವಾಸುದೇವ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ

ಪಿ.ಆರ್. 71

### ಅಧಿಸೂಚನೆ

**ಸಂಖ್ಯೆ: ಸಇ 299 ಎಂಆರ್‌ಇ 2008, ಬೆಂಗಳೂರು, ದಿನಾಂಕ: 15ನೇ ಜನವರಿ 2009**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 18(2)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಚನ್ನಗಿರಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಶ್ರೀ ಕೆ.ಎಸ್. ಚಂದ್ರಶೇಖರ್ ರವರನ್ನು ಸಹಕಾರ ಸಂಸ್ಕರಣ ಘಟಕದ ವತಿಯಿಂದ ಆಡಳಿತ ಮಂಡಳಿಯ ಸದಸ್ಯರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಾಮನಿರ್ದೇಶನ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಕೆ. ವಾಸುದೇವ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ

ಪಿ.ಆರ್. 72

### ಅಧಿಸೂಚನೆ

**ಸಂಖ್ಯೆ: ಸಿಒ 03 ಸಿಎಸ್ಎಸ್ 2009, ಬೆಂಗಳೂರು, ದಿನಾಂಕ: 17ನೇ ಜನವರಿ 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಸದಾಶಿವ ಕಮಲಾಕರ ದೇಸಾಯಿ, ಮು:ಯರಮುಖ, ಗುಂದ ಅಂಚೆ, ಜೋಯಿಡಾ ತಾಲ್ಲೂಕು ಇವರನ್ನು ಉತ್ತರ ಕನ್ನಡ ಜಿಲ್ಲೆ ಜೋಯಿಡಾ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ. ಜೋಯಿಡಾ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

ಪಿ.ಆರ್. 73

**ಅಧಿಸೂಚನೆ**

**ಸಂಖ್ಯೆ: ಸಿಒ 04 ಸಿಎನ್‌ಎಸ್ 2009, ಬೆಂಗಳೂರು, ದಿನಾಂಕ: 17ನೇ ಜನವರಿ 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಎಂ. ಪರಮೇಶ್ವರಪ್ಪ ತಂದೆ ಮಲ್ಲಪ್ಪ, ಪಂಡೋಮಟ್ಟಿ ಗ್ರಾಮ ಮತ್ತು ಅಂಚೆ, ಚನ್ನಗಿರಿ ತಾಲ್ಲೂಕು ಇವರನ್ನು ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ. ಚನ್ನಗಿರಿ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

ಪಿ.ಆರ್. 74

**ಅಧಿಸೂಚನೆ**

**ಸಂಖ್ಯೆ: ಸಿಒ 05 ಸಿಎನ್‌ಎಸ್ 2009, ಬೆಂಗಳೂರು, ದಿನಾಂಕ: 17ನೇ ಜನವರಿ 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಕೆಳಕಂಡ ವ್ಯಕ್ತಿಗಳನ್ನು ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ನಿ., ಹಗರಿಬೊಮ್ಮನಹಳ್ಳಿ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

1. ಶ್ರೀಮತಿ ಕಾಸಿಂಬೀ ಗಂಡ ಲೇಟ್ ದಾದಾಸಾಬ್, ಹಗರಿಬೊಮ್ಮನಹಳ್ಳಿ
2. ಶ್ರೀ ಕೊಟ್ರಯ್ಯ ಸ್ವಾಮಿ ತಂದೆ ಶೇಖರಯ್ಯ, ರಾಮೇಶ್ವರಬಂಡಿ
3. ಶ್ರೀ ವಿ. ನಾಗರಾಜ ತಂದೆ ತಿಂದಪ್ಪ ಹನಸಿ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

ಪಿ.ಆರ್. 75

**ಅಧಿಸೂಚನೆ**

**ಸಂಖ್ಯೆ: ಸಿಒ 14 ಸಿಎನ್‌ಎಸ್ 2009, ಬೆಂಗಳೂರು, ದಿನಾಂಕ: 19ನೇ ಜನವರಿ 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಶ್ರೀಶೈಲ ಸಂಗಯ್ಯ ಅಳ್ಳೊಳ್ಳಿ ಮಠ, ಸಾ: ಆಲಮೇಲ್, ಇವರನ್ನು ಬಿಜಾಪುರ ಜಿಲ್ಲೆ ಸಿಂಧಗಿ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಸಿಂಧಗಿ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

ಪಿ.ಆರ್. 76

**ಅಧಿಸೂಚನೆ**

**ಸಂಖ್ಯೆ: ಸಿಒ 189 ಸಿಎನ್‌ಎಸ್ 2008, ಬೆಂಗಳೂರು, ದಿನಾಂಕ: 17ನೇ ಜನವರಿ 2009**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 (1959ರ ಕರ್ನಾಟಕ ಅಧಿನಿಯಮ ಸಂಖ್ಯೆ 11)ರ ಪ್ರಕರಣ 29ರ ಉಪ ಪ್ರಕರಣ (1)ರ ಮೇರೆಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಶ್ರೀ ಕೃಷ್ಣಮೂರ್ತಿ ಬಿನ್ ಮರಿಯಪ್ಪಗೌಡ, ರಾಯಪ್ಪನಪಾಳ್ಯ ಕುದೂರು ಹೋಬಳಿ, ಮಾಗಡಿ ತಾಲ್ಲೂಕು ಇವರನ್ನು ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕಿನ ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ., ಮಾಗಡಿ ಇದರ ಆಡಳಿತ ಮಂಡಳಿಗೆ ಸದಸ್ಯರನ್ನಾಗಿ ಈ ಕೂಡಲೇ ಜಾರಿಗೆ ಬರುವಂತೆ ನಾಮನಿರ್ದೇಶನ ಮಾಡುತ್ತದೆ. ಹೀಗೆ ನಾಮನಿರ್ದೇಶನಗೊಂಡ ಸದಸ್ಯರ ಪದಾವಧಿಯು ಚುನಾಯಿತ ಸಮಿತಿಯ ಪದಾವಧಿಯು ಮುಕ್ತಾಯವಾಗುವವರೆಗೆ ಅಥವಾ ಸರ್ಕಾರದ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎಸ್. ಹುಚ್ಚಾಚಾರಿ**

ಪಿ.ಆರ್. 77

ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

**ಅರಣ್ಯ ಪರಿಸರ ಮತ್ತು ಜೀವಿಪರಿಸ್ಥಿತಿಶಾಸ್ತ್ರ ಸಚಿವಾಲಯ**

**ಅಧಿಸೂಚನೆ**

**ಅಪಜೀ 58 ಎಫ್‌ಎಎಫ್ 2006, ಬೆಂಗಳೂರು, ದಿನಾಂಕ: 02ನೇ ಡಿಸೆಂಬರ್ 2008.**

ಕರ್ನಾಟಕ ಅರಣ್ಯ ಕಾಯ್ದೆ 1963ನೇ (1964ನೇ ಇಸವಿಯ ಕಾಯ್ದೆ 5)ಕಲಂ–4ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಈ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿರುವ ಚಾಮರಾಜನಗರ ಜಿಲ್ಲೆ, ಗುಂಡ್ಲುಪೇಟೆ ತಾಲ್ಲೂಕು ಹಂಗಳ ಹೋಬಳಿ, ಬಾಚಳ್ಳಿ ಗ್ರಾಮದ ಸರ್ಕಾರಿ ಜಮೀನುಗಳನ್ನು ಈ ಅಧಿಸೂಚನೆಯು ಗೆಜೆಟ್‌ನಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರುವಂತೆ, "ಮೀಸಲು ಅರಣ್ಯ" ವೆಂದು ಈ ಮೂಲಕ ಘೋಷಿಸಿದೆ.

ಅನುಸೂಚಿ

1) ಹೋಬಳಿ ಮತ್ತು ಗ್ರಾಮದ ಹೆಸರು : ಹಂಗಳ ಹೋಬಳಿ ಬಾಚಳ್ಳಿ ಗ್ರಾಮ

2) ಕ್ಷೇತ್ರದ ಸರ್ವೆ ನಂಬರು : ವಿಸ್ತೀರ್ಣ (ಎಕರೆ ಮತ್ತು ಗುಂಟೆ)

| ಕ್ಷೇತ್ರದ ಸರ್ವೆ ನಂಬರು | ವಿಸ್ತೀರ್ಣ (ಎಕರೆ ಮತ್ತು ಗುಂಟೆ) |
|---|---|
| 242 | 250 ಎಕರೆ 32 ಗುಂಟೆ |
| 284 | 197 ಎಕರೆ 27 ಗುಂಟೆ |
| | ಒಟ್ಟು :448 ಎಕರೆ 19 ಗುಂಟೆ |

3) ಕ್ಷೇತ್ರದ ಹೆಸರು : ಬಾಚಳ್ಳಿ, ಸರ್ವೆ ನಂ.242 ಮತ್ತು 284 'ಸಿ' ಮತ್ತು 'ಡಿ' ನೆಡುತೋಪು.

ಮೇಲ್ಕಂಡ ಕಾಯ್ದೆಯ ಕಲಂ–4(1)(ಸಿ) ಪ್ರಕಾರ ಕರ್ನಾಟಕ ಸರ್ಕಾರವು ಕೊಳ್ಳೇಗಾಲ ಕಂದಾಯ ಉಪ ವಿಭಾಗಾಧಿಕಾರಿ, ಕೊಳ್ಳೇಗಾಲ ಇವರನ್ನು ಅರಣ್ಯ ವ್ಯವಸ್ಥಾಪನಾಧಿಕಾರಿಗಳನ್ನಾಗಿ ನೇಮಿಸಿದೆ. ಅರಣ್ಯ ವ್ಯವಸ್ಥಾಪನಾಧಿಕಾರಿಗಳು ಮೇಲೆ ನಮೂದಿಸಿರುವ ಪ್ರದೇಶದ ಮೇಲೆ ಯಾವುದೇ ವ್ಯಕ್ತಿಗೆ ಇರಬಹುದಾಗಿರುವ ಹಕ್ಕು ಬಾಧ್ಯತೆಗಳನ್ನು ಇತ್ಯಾರ್ಥಗೊಳಿಸಿ, ನಿರ್ಧರಿಸಿ, ವಿಚಾರಣೆ ಮಾಡಿ ತೀರ್ಮಾನಿಸುವುದು.

ಮೇಲ್ಕಂಡ ಕಾಯ್ದೆ ಕಲಂ–4(2) ರ ಪ್ರಕಾರ ಉಪ ಅರಣ್ಯ ಸಂರಕ್ಷಣಾದಿಕಾರಿಗಳು, ಕೊಳ್ಳೆಗಾಲ ವಿಭಾಗ, ಕೊಳ್ಳೇಗಾಲ ಇವರು ಈ ವಿಚಾರಣೆಯಲ್ಲಿ ಅರಣ್ಯ ವ್ಯವಸ್ಥಾಪನಾಧಿಕಾರಿಗಳಿಗೆ ಸಹಕರಿಸಲು ಹಾಗೂ ಅರಣ್ಯ ಇಲಾಖೆಯ ಪರವಾಗಿ ಪ್ರತಿನಿಧಿಸಲು ನೇಮಿಸಿದೆ.

ಮೇಲ್ಕಂಡ ಅಧಿನಿಯಮ 11, 12 ಮತ್ತು 14ನೇ ಪ್ರಕರಣಗಳ ಪ್ರಕಾರ ಅರಣ್ಯ ವ್ಯವಸ್ಥಾಪಾಧಿಕಾರಿಗಳು ಯಾವುದೇ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳೊಳಗಾಗಿ ಬಾಧಿತವಾದ ವ್ಯಕ್ತಿಗಳು ಸಲ್ಲಿಸಿದ ಮೇಲ್ಮನವಿಗಳನ್ನು ಪರಿಶೀಲಿಸಲು ಸದರಿ ಕಾಯ್ದೆಯ ಕಲಂ–16(1) ನೇ ಪ್ರಕಾರ ಕರ್ನಾಟಕ ಕಂದಾಯ ಮೇಲ್ಮನವಿ ನ್ಯಾಯ ಮಂಡಲಿಗೆ ಅಧಿಕಾರವಿರುತ್ತದೆ.

ಮೇಲ್ಕಂಡ ಅಧಿನಿಯಮ 15ನೇ ಪ್ರಕರಣದ ಪ್ರಕಾರ ಭಾದಿತವಾದ ಯಾವುದೇ ವ್ಯಕ್ತಿಯು ಸದರಿ ಅಧಿನಿಯಮದ ಪ್ರಕರಣ 16(2)ನೇ ಪ್ರಕಾರ ಆದೇಶ ಹೊರಡಿಸಿದ ದಿನಾಂಕದಿಂದ 3 ತಿಂಗಳೊಳಗೆ ಜಿಲ್ಲಾ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಬಹುದು.

ಗಡಿ ವಿವರಣೆ

**ಉತ್ತರ** :– ಸರ್ವೆ ರೇಖೆಯು ಬಾಚಳ್ಳಿ ಗ್ರಾಮ ಸರ್ವೆ ನಂ.286 ರ ಒಂದು ಕಟ್ಟೆ (ಮೂಲೆ ಗೌಡನಕಟ್ಟೆ) ಯ ಉತ್ತರಾದಿ ಮೂಲೆಯಿಂದ ಈಶಾನ್ಯಾಭಿಮುಖವಾಗಿ ಹಾಗೂ ಪೂರ್ವಾಭಿಮುಖವಾಗಿ ಸರ್ವೆ ನಂ.242ರ ವಾಯುವ್ಯ ಗಡಿ ರೇಖೆ, ನಂತರ ಸರ್ವೆ ನಂಬರ್ 242 ರಲ್ಲಿ ಪೂರ್ವಾಭಿಮುಖವಾಗಿ ಹೊರಟು ಸರ್ವೆ ಸ್ಥಳ 1 ರಿಂದ ಸರ್ವೆ ಸ್ಥಳ 20 ಈ ಕೆಳಕಂಡ ಕೋನ ಮತ್ತು ದೂರಗಳಲ್ಲಿ ತಲುಪುತ್ತದೆ.

| ಕಲ್ಲುಕಂಬ | ಕೋನ (ಡಿಗ್ರಿಗಳಲ್ಲಿ) | ದೂರ (20 ಮಿ.ಸರಪಳಿಗಳಲ್ಲಿ) |
|---|---|---|
| 1–8 | | 47 |
| 8–20 | 76° | 75.50 |

**ಪೂರ್ವ**:–ಸರ್ವೆ ರೇಖೆಯು ದಕ್ಷಿಣಾಭಿಮುಖವಾಗಿ ಸರ್ವೆ ಸ್ಥಳ 20 ರಿಂದ ಹೊರಟು ಸರ್ವೆ ಸ್ಥಳ 21 ಹಾಗೂ A ಯನ್ನು (ಹೆಗ್ಗವಾಡಿ ಸ್ಟೇಟ್ ಫಾರೆಸ್ಟ್‌ನ ಒಂದನೇ ಬ್ಲಾಕಿನ ಉತ್ತರ ಗಡಿ) ಲೈನನ್ನು ಈ ಕೆಳಕಂಡ ಕೋನ ಮತ್ತು ದೂರಗಳಲ್ಲಿ ತಲುಪುತ್ತದೆ.

| ಕಲ್ಲುಕಂಬ | ಕೋನ (ಡಿಗ್ರಿಗಳಲ್ಲಿ) | ದೂರ (20 ಮಿ.ಸರಪಳಿಗಳಲ್ಲಿ) |
|---|---|---|
| 20– A | 164° | 13.00 |

**ದಕ್ಷಿಣಕ್ಕೆ**:–_ಸರ್ವೆ ರೇಖೆಯು ಹೆಗ್ಗವಾಡಿ ಸ್ಟೇಟ್ ಫಾರೆಸ್ಟ್ ಒಂದನೇ ಬ್ಲಾಕಿನ ಉತ್ತರ ಗಡಿ ಲೈನು A ಸ್ಥಳದಿಂದ ಹೊರಟು ಸದರಿ ಗ್ರಾಮದ ಸರ್ವೆ ನಂಬರ 242ರ ಮೂಲಕ ನೈರುತ್ಯ ಹಾಗೂ ದಕ್ಷಿಣಾಭಿಮುಖವಾಗಿ ಸರ್ವೆ ನಂಬರ್ 284 ರ ಹೆಗ್ಗವಾಡಿ ಸ್ಟೇಟ್ ಫಾರೆಸ್ಟ್ ಒಂದನೆ ಬ್ಲಾಕಿನ ಉತ್ತರ ಗಡಿ ಲೈನಿನಲ್ಲಿ ಬಂದು ಹೆಗ್ಗವಾಡಿ ಸ್ಟೇಟ್ ಫಾರೆಸ್ಟ್‌ನ ವಾಯುವ್ಯ ಮೂಲೆ ಸರ್ವೆ ಸ್ಥಳ 'H' ನ್ನು ಈ ಕೆಳಕಂಡ ಕೋನ ಮತ್ತು ದೂರಗಳಲ್ಲಿ ತಲುಪುತ್ತದೆ.

| ಕಲ್ಲುಕಂಬ | ಕೋನ (ಡಿಗ್ರಿಗಳಲ್ಲಿ) | ದೂರ (20 ಮಿ.ಸರಪಳಿಗಳಲ್ಲಿ) |
|---|---|---|
| A-B | 229° | 43.00 |
| B-C | 232° | 27.00 |
| C-D | 198° | 30.00 |
| D-E | 191° | 26.00 |
| E-F | 220° | 8.00 |
| F-G | 244° | 4.00 |
| G-H | 122° | 6.00 |

**ಪಶ್ಚಿಮಕ್ಕೆ**:– ಸರ್ವೆ ರೇಖೆಯು ಸರ್ವೆ ಸ್ಥಳ H ನಿಂದ ವಾಯುವ್ಯ, ಪೂರ್ವ, ಉತ್ತರ, ಈಶಾನ್ಯ ಹಾಗೂ ಪಶ್ಚಿಮಾಭಿಮುಖವಾಗಿ ಹೊರಟು ಪ್ರಾರಂಭಿಕ ಸರ್ವೆ ಸ್ಥಳ 1 ನ್ನು ಈ ಕೆಳಕಂಡ ಕೋನ ಡಿಗ್ರಿ ಮತ್ತು ದೂರಗಳಲ್ಲಿ ತಲುಪುತ್ತದೆ.

| ಕಲ್ಲುಕಂಬ | ಕೋನ (ಡಿಗ್ರಿಗಳಲ್ಲಿ) | ದೂರ (20 ಮಿ.ಸರಪಳಿಗಳಲ್ಲಿ) |
|---|---|---|
| H –31 | 337° | 59.50 |
| 31–32 | 104° | 4.50 |
| 32–34 | 16° | 10.50 |
| 34–36 | 42° | 14.00 |
| 36–37 | 84° | 5.00 |
| 37–38 | 360° | 3.00 |
| 38–1 | 270° | 28.00 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆ

ಪಿ.ಆರ್. 417

**ಅಧಿಸೂಚನೆ**

**ಸಂಖ್ಯೆ:ಅಪಜೀ 194 ಎಫ್‌ಎಫ್ 2007, ಬೆಂಗಳೂರು, ದಿನಾಂಕ:6ನೇ ಡಿಸೆಂಬರ್ 2008**

ಕರ್ನಾಟಕ ಅರಣ್ಯ ಕಾಯ್ದೆ 1963 (1964ನೇ ಕರ್ನಾಟಕ ಕಾಯ್ದೆ ಕಲಂ 5)ರ ಕಲಂ 17ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಎಫ್‌ಎಫ್‌ಡಿ 272 ಎಫ್‌ಎಫ್ 80(3), ದಿನಾಂಕ: 17–12–1981ರ ಪ್ರಕಾರ ಈ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿರುವ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ನಂತೂರು ಮತ್ತು ತಲ್ಲೂರು ಗ್ರಾಮದ ಜಮೀನುಗಳನ್ನು ಈ ಅಧಿಸೂಚನೆ ಗೆಜೆಟ್‌ನಲ್ಲಿ ಪ್ರಕಟಗೊಂಡ

ದಿನಾಂಕದಿಂದ ಜಾರಿಗೆ ಬರುವಂತೆ ಅಧಿಸೂಚನೆಯ ಕೊನೆಯಲ್ಲಿ ನಮೂದಿಸಿರುವ ಹಕ್ಕುಗಳ ಉಪಯೋಗಕ್ಕೆ ಒಳಪಟ್ಟು "ಮೀಸಲು ಅರಣ್ಯ"ವೆಂದು ಕರ್ನಾಟಕ ಸರ್ಕಾರವು ಈ ಮೂಲಕ ಘೋಷಿಸಿದೆ.

**: ಅ ನು ಸೂ ಚಿ :**

**1. ಗ್ರಾಮ** : ನಂತೂರು ಮತ್ತು ತಲ್ಲೂರು

**2. ಸರ್ವೆ ನಂ.** : **3) ವಿಸ್ತೀರ್ಣ (ಎ.–ಗುಂ.)**

| | |
|---|---|
| 28 | 110–00 |
| 56 | 150–00 |
| 81 | 80–00 |
| 219 | 35–00 ತಲ್ಲೂರು ಗ್ರಾಮ |

**ಒಟ್ಟು 375ಎ.–00ಗುಂ.**

**4. ಕ್ಷೇತ್ರದ ಹೆಸರು:** ನಂತೂರು ಮೀಸಲು ಅರಣ್ಯ.

**ಗಡಿ ವಿವರಣೆ**

ಬ್ಲಾಕ್ – 1: ಸರ್ವೆ ನಂ.56, 81, ವಿಸ್ತೀರ್ಣ 138ಎ.–31ಗುಂ.

**ಉತ್ತರ:–**

ರೇಖೆಯು ಸ್ಥಾನಸಂಖ್ಯೆ 29 ರಿಂದ ಪ್ರಾರಂಭವಾಗುತ್ತದೆ. ಇದು ಕುಂದಾ ರಾಜ್ಯ ಅರಣ್ಯ ಗಡಿಯ ಮೇಲೆ ಸ್ಥಿರವಾಗಿದೆ. ಇಲ್ಲಿ ಹೊಸ ಕಲ್ಲು ನಂ.2ನ್ನು ಸ್ಥಿರಪಡಿಸಲಾಗಿದೆ. ರೇಖೆಯು ಬ್ಲಾಕ್ – 1ರಲ್ಲಿ ಕುಂದಾ ರಾಜ್ಯ ಅರಣ್ಯ ಗಡಿಯ ಮೇಲೆ ಆಗ್ನೇಯ ಮತ್ತು ಪೂರ್ವ ದಿಕ್ಕುಗಳಲ್ಲಿ ಅಂದಾಜು 75 ಸರಪಳಿ ದೂರ ಕ್ರಮಿಸಿ ಸ್ಥಾನಸಂಖ್ಯೆ 30ನ್ನು ತಲುಪುತ್ತದೆ.

**ಪೂರ್ವ:–**

ರೇಖೆಯು ಸ್ಥಾನಸಂಖ್ಯೆ 30 ರಿಂದ ದಕ್ಷಿಣಾಭಿಮುಖವಾಗಿ ಕುಂದಾ ಮತ್ತು ನಂತೂರು ಗ್ರಾಮದ ಸಾಮಾನ್ಯ ಗಡಿಯ ಮೇಲೆ ಅಂದಾಜು 22 ಸರಪಳಿ ದೂರ ಕ್ರಮಿಸಿ ಸ್ಥಾನಸಂಖ್ಯೆ 1 (ಕಲ್ಲು ನಂ.5)ನ್ನು ಸೇರುತ್ತದೆ.

**ದಕ್ಷಿಣ:–**

ರೇಖೆಯು ಸ್ಥಾನಸಂಖ್ಯೆ 1 (ಕಲ್ಲು ನಂ.5) ರಿಂದ ಪೂರ್ವಾಭಿಮುಖವಾಗಿ ಸರ್ವೆ ನಂ. 81 ಮತ್ತು 91ರ ಸಾಮಾನ್ಯ ಗಡಿಯ ಮೇಲೆ 18.50 ಸರಪಳಿ ದೂರ ಕ್ರಮಿಸಿ ಸ್ಥಾನಸಂಖ್ಯೆ 2 (ಕಲ್ಲು ನಂ.11)ನ್ನು ಮುಟ್ಟುತ್ತದೆ. ತದನಂತರ ರೇಖೆಯು ಕಂದಾಳ ಬೈಲು – ಕುಂದಾ ರಸ್ತೆಯ ಮೇಲೆ ವಾಯುವ್ಯ ಮತ್ತು ನೈರುತ್ಯ ದಿಕ್ಕಿನಲ್ಲಿ ಮಧ್ಯದ ಸ್ಥಾನಸಂಖ್ಯೆ 3 ರಿಂದ 20ರ ವರೆಗೆ 44.50 ಸರಪಳಿ ದೂರ ಕ್ರಮಿಸಿ ಸ್ಥಾನಸಂಖ್ಯೆ 21 (ಕಲ್ಲು ನಂ.14)ನ್ನು ಸೇರುತ್ತದೆ. ಮತ್ತೆ ರೇಖೆಯು ವಾಯುವ್ಯಾಭಿಮುಖವಾಗಿ 16.75 ಸರಪಳಿ ದೂರ ಕ್ರಮಿಸಿ ಸ್ಥಾನಸಂಖ್ಯೆ 22 (ಕಲ್ಲು ನಂ.20)ನ್ನು ಮುಟ್ಟುತ್ತದೆ. ತದನಂತರ ಗಡಿರೇಖೆಯು ಕಂದಾಳ ಬೈಲು ಕುಂದಾ ರಸ್ತೆ ದಾಟಿ 4 ಸರಪಳಿ ದೂರ ಕ್ರಮಿಸಿ ಸ್ಥಾನಸಂಖ್ಯೆ 23 (ಕಲ್ಲು ನಂ.23)ನ್ನು ಮುಟ್ಟುತ್ತದೆ. ಪುನಃ ರೇಖೆಯು ವಾಯುವ್ಯಾಭಿಮುಖವಾಗಿ 4 ಸರಪಳಿ ದೂರ ಕ್ರಮಿಸಿ ಸ್ಥಾನಸಂಖ್ಯೆ 24 (ಕಲ್ಲು ನಂ.26)ನ್ನು ಸೇರುತ್ತದೆ. ನಂತರ ಗಡಿರೇಖೆಯು ಆಗ್ನೇಯಾಭಿಮುಖವಾಗಿ 18 ಸರಪಳಿ ದೂರ ಕ್ರಮಿಸಿ ಸ್ಥಾನಸಂಖ್ಯೆ 25 (ಕಲ್ಲು ನಂ.32)ನ್ನು ಮುಟ್ಟುತ್ತದೆ. ಮತ್ತೆ ರೇಖೆಯು ನೈರುತ್ಯಾಭಿಮುಖವಾಗಿ 15 ಸರಪಳಿ ದೂರ ಕ್ರಮಿಸಿ ಸ್ಥಾನಸಂಖ್ಯೆ 26ನ್ನು ಮುಟ್ಟುತ್ತದೆ.

**ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಕೆಳಗಿನಂತಿದೆ.**

| ಸ್ಥಾನಸಂಖ್ಯೆಯಿಂದ | ಸ್ಥಾನಸಂಖ್ಯೆಗೆ | ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|---|
| 1 | 2 | 270.30 | 18.50 |
| 2 | 3 | 320 | 2.50 |
| 3 | 4 | 312 | 5 |
| 4 | 5 | 255.30 | 2.25 |
| 5 | 6 | 317 | 2 |
| 6 | 7 | 331 | 1.50 |
| 7 | 8 | 302.30 | 3.75 |
| 8 | 9 | 270 | 2.50 |
| 9 | 10 | 279 | 3.75 |
| 10 | 11 | 255 | 2.50 |

